ಕಥೆಗಾರ್ತಿಯರ ಸಾಮಾನ್ಯ ವಿಶೇಷತೆ. ಆದರೆ ಅಮೃತಾ ಮತ್ತು ಅಜೀತರ ಕಥೆಗಳ ಅಂತ್ಯ ನಿಃಶೇಷತೆಯಲ್ಲಿ ಆಗುತ್ತದೆ. ದಲೀಪಕೌರಳ ಕಥೆಗಳು ಸಂಯಮದಲ್ಲಿ ಕೊನೆಗಾಣುತ್ತವೆ.

'ಮರಣ ಋತು'ವೂ ತಾರುಣ್ಯದ ಪ್ರೇಮಾನುಭವದ ಕಥೆಯಾಗಿದೆ. ಪ್ರೇಮ ಮತ್ತು ಕಾಮಗಳ ಮಿಲನ ಬಿಂದು ಒಂದೇ ಆಗದಿದ್ದಲ್ಲಿ ಬಿಗಿತ-ಬಿಕ್ಕಟ್ಟು ಉಂಟಾಗುತ್ತದೆ. ಆದರೆ ಈ ಬಿಂದುವಿನ ಅಭಾವದ ಪರಿಚಯದ ಮುಖಾಂತರ ಈ ಬಿಗಿತ-ಬಿಗಿಕಟ್ಟಿನ ಮೇಲೆ ಅಂಕೆ ಪಡೆಯಲಾಗುತ್ತದೆ.

## ಬೂಟಾಸಿಂಗ್

ಜನನ : 1919

ಶಿಕ್ಷಣ : M.A. (ಪಂಜಾಬಿ)

ಉದ್ಯಮ : ಸರಕಾರಿ ಚಾಕರಿ (ಟ್ರೈನ್ ಎಗ್ಸಾಮಿನರ್, ರೇಲ್ವೆ ಸ್ಟೇಷನ್, ದೆಹಲಿ).

ಕಥಾಸಂಗ್ರಹ : ಲೊ ಚುಬಾರೆ ದೀ.

ವಿಳಾಸ : 75|3 ನ್ಯೂ ರೇಲ್ವೆ ಕ್ವಾರ್ಟರ್ಸ್, ಸಬ್ಜಿಮಂಡಿ, ದೆಹಲಿ-6.

ಬೂಟಾ ಸಿಂಗರ ಒಂದೇ ಕಥಾಸಂಗ್ರಹ ಪ್ರಕಟವಾಗಿದೆ. ಆದರೆ ಕಳೆದ ಕೆಲವು ವರ್ಷಗಳಿಂದ ಇವರ ಕಥೆಗಳು ಪಂಜಾಬೀ ಪತ್ರಿಕೆಗಳಲ್ಲಿ ಅನುಕ್ರಮವಾಗಿ ಅಚ್ಚಾಗುತ್ತಲೇ ಇವೆ. ಈಚೆಗೆ ಅವರು ಒಂದು ಕಾದಂಬರಿಯನ್ನು ಪ್ರಕಟಿಸುವುದರಲ್ಲಿ ತೊಡಗಿದ್ದಾರೆ. ಅವರ ಬಹಳಷ್ಟು ಕಥೆಗಳು ನಗರದ ಮಧ್ಯಮವರ್ಗಕ್ಕೆ ಸಂಬಂಧಪಟ್ಟಿರುತ್ತವೆ. ವಿಲಕ್ಷಣ ಜೀವನ ಖಂಡವನ್ನು ತಮ್ಮ ಕಥೆಯ ವಿಷಯವಾಗಿ ಆರಿಸಿಕೊಳ್ಳುವುದು ಇವರಿಗೆ ಬಹುಹಿತ. ನಿಷಿದ್ಧ ಕಾಮುಕತೆ ಇವರ ಕಥೆಗಳಲ್ಲಿ ಒಂದಲ್ಲ ಒಂದು ರೂಪದಲ್ಲಿ ಪ್ರವೇಶ ಪಡೆದಿರುತ್ತದೆ.

'ಮಾಯಿ ಸುಧರಾಂ' ಇವರ ಆರಂಭದ ಕಥೆಗಳಲ್ಲಿ ಒಂದು. ಮೊತ್ತಮೊದಲು ಇದೇ ಕಥೆಯ ಮೂಲಕ ಬೂಟಾಸಿಂಗರಿಗೆ ಖ್ಯಾತಿಯು ಲಭಿಸಿತು. ತಾನೂ ರೇಲ್ವೆ ಶಂಟಿಂಗ್ ಲೈನಿನೊಂದಿಗೆ ಸಂಬಂಧಪಟ್ಟವರಾದ್ದರಿಂದ ಬುಟಾಸಿಂಗರಿಗೆ ಈ ಬದುಕಿನ ನಿಕಟ ಅನುಭವವಿದ್ದು ಅದು ಈ ಕಥೆಯಲ್ಲಿ ಸಹಜವಾಗಿ ಪ್ರಾಮಾಣಿಕ ಅಭಿವ್ಯಕ್ತಿ ಪಡೆದಿದೆ.

## ಜಸವಂತ್ ಸಿಂಗ್ ವಿರದೀ

ಜನನ : 1934

ಶಿಕ್ಷಣ : M.A. (ಹಿಂದಿ)

ಉದ್ಯಮ : ಸರಕಾರಿ ಚಾಕರಿ (ಸಂಪಾದಕ, ಹಿಂದೀ ಶಿಕ್ಷಾ ವಿಭಾಗ, ಪಂಜಾಬ ಸರಕಾರ)

ಕಥಾಸಂಗ್ರಹ : ಪೀಡ ಪರಾಯೀ, ಅಪನೀ ಅಪನೀ ಸೀಮಾ.

ವಿಳಾಸ : ಸಂಪಾದಕ, ಹಿಂದೀ ಶಿಕ್ಷಾ ವಿಭಾಗ, ಪಂಜಾಬ ಸರಕಾರ, ಚಂಡೀಗಢ.

ಜಸವಂತ್ ಸಿಂಗ್ ವಿರದೀ ಹೊಸ ತಲೆಮಾರಿನ ಪ್ರಮುಖ ಕಥೆಗಾರರು—ಅನುಭವದ ಬಗ್ಗೆ ಯಥಾರ್ಥವಾದಿ, ಅಭಿವ್ಯಕ್ತಿಯ ಬಗ್ಗೆ ಜಾಗ್ರತೆ. ಇವರ ವಿಕಾಸ ಯಾತ್ರೆ ನಿರಂತರ ಪ್ರಯೋಗದ ಭರವಸೆ ತುಂಬುತ್ತದೆ. ಅವರ ಪ್ರತೀಕಾತ್ಮಕ ಕಥೆಯಾದ ತಾರೆ ತೋಡನಾ ಅವರ ಪ್ರಸಿದ್ಧಿಗೆ ಆಧಾರವಾಯಿತು. ಕ್ರಮೇಣ ವಿರದೀ ತಮ್ಮ ಕಥೆಯನ್ನು ಘಟನೆ ಮತ್ತು ಚರಿತ್ರದ ಬಂಧನದಿಂದ ಮುಕ್ತ ಮಾಡಿದ್ದಾರೆ. ವಿರದೀಯ ಕೃತಿಗಳಲ್ಲಿ ಘಟನೆ ಅಥವಾ ಚಾರಿತ್ರ ಸ್ವತಂತ್ರ ಕಲಾ ತತ್ವದ ರೂಪದಲ್ಲಿ ಅಲ್ಲ, ಸಮಗ್ರ ಬದುಕನ್ನು ವಸ್ತುನ್ಮುಖಿಯಾಗಿ ಭಾವುಕತಾರಹಿತ ದೃಷ್ಟಿಯಿಂದ ರೂಪಿಸಲಾಗಿದೆ. ಮತ್ತು ಇದೇ ವಿರದೀಯ ಕಥೆಗಳ ವಿಶೇಷತೆಯಾಗಿದೆ.

ಅಪನೀ ಅಪನೀ ಸೀಮಾ (ಅವರವರ ಗಡಿಗಳು) ಈ ಕಥೆಯಲ್ಲಿ ಸಂಕ್ರಮಣ ಕಾಲದ ಜೀವನದ ಸಹಜ ವಸ್ತುನ್ಮುಖಿಯಾದ ಚಿತ್ರಣವಿದೆ. ಇದು ಶುದ್ಧ ಹೆಣ್ಣಿನ ಕಥೆಯೂ ಅಲ್ಲ, ಗಂಡಿನ ಕಥೆಯೂ ಅಲ್ಲ, ಸಮಸ್ಯೆಯನ್ನು ಶುದ್ಧ ಹೆಣ್ಣಿನ ಅಥವಾ ಶುದ್ಧ ಗಂಡಿನ ದೃಷ್ಟಿಯಿಂದ ನೋಡಿಲ್ಲ. ಎರಡೂ ದೃಷ್ಟಿಕೋನಗಳಲ್ಲಿ ಒಡಂಬಡಿಕೆ ಮಾಡಿಸುವ ಪ್ರಯತ್ನವೂ ಇಲ್ಲ. ಇದು ಕೇವಲ ವ್ಯಕ್ತಿ—ಮಾನವ ತನ್ನ ತನ್ನ ಮಿತಿಯಲ್ಲಿ ಕಾಣಿಸಿಕೊಳ್ಳುವಂತಹ ಆಧುನಿಕ ವಿಚಾರವಾಗಿದೆ.

# ಮೋಹನ ಭಂಡಾರೀ

ಜನನ : 1937

ಶಿಕ್ಷಣ : B.A.,LL.B.

ಉದ್ಯಮ : ಸರಕಾರಿ ಚಾಕರಿ (ಶಿಕ್ಷಾ ವಿಭಾಗ, ಪಂಜಾಬ್)

ಕಥಾಸಂಗ್ರಹ : ತಿಲಚೌಲೀ, ಮನುಜ್ ದೀ ಪೈಡ.

ವಿಳಾಸ : 1385 A/20-B ಬಿ. ಸೆಕ್ಟರ್, ಚಂಡೀಗಢ.

ಮೋಹನ ಭಂಡಾರೀ ಹೊಸ ತಲೆಮಾರಿನ ಪ್ರಮುಖ ಲೇಖಕರಲ್ಲಿ ಒಬ್ಬರು. ಅವರ ಶೈಲಿ ಹಳೆಯ ಮತ್ತು ಹೊಸತರ ನಡುವೆ ಸಂಕ್ರಮಣದ ರೇಖೆಯ ಮೇಲೆ ನಿಂತಂತೆ ಅನಿಸುತ್ತದೆ. ಮಾಳ್ವ ಪ್ರದೇಶದ ಭೂಮಿಹೀನ ಹಳ್ಳಿಗಾಡು ಜನವರ್ಗ ಇವರ ಕಥೆಗಳ ಪ್ರಮುಖ ವಿಷಯ. ಈ ಜನಗಳ ಕಷ್ಟಮಯವಾದ ಬದುಕನ್ನು ಅವರು ಸಹಾನುಭೂತಿ ಮತ್ತು ವ್ಯಂಗ್ಯ ಮಿಶ್ರಿತ ಧ್ವನಿಯಲ್ಲಿ ನಿರೂಪಿಸುತ್ತಾರೆ. ಪ್ರಚಲಿತ ಪ್ರವಾಹಿಯಾದ ಭಾಷೆ ಅವರ ಕಥಾ ಶಿಲ್ಪದ ಪ್ರಮುಖ ವಿಶೇಷತೆ.

'ಮುಝೆ ಟಾಗೋರ ಬನಾದೇ ಮಾಂ . . .' (ನನ್ನನ್ನು ಟಾಗೋರನಾಗಿ ಮಾಡಮ್ಮಾ) ಕಥೆಯಲ್ಲಿ ಹಳ್ಳಿಯ ಕುಂಬಾರನ ಸಾಧಾರಣ ಸ್ಥಿತಿ ಮತ್ತು ಅವನ ವ್ಯಕ್ತಿ ಚಿತ್ರಣವನ್ನು ಭಾರಿ ಸಾಮಂಜಸ್ಯದ ರೀತಿಯಲ್ಲಿ ಪ್ರಸ್ತುತಪಡಿಸಲಾಗಿದೆ. ಕಥೆಯ ಕೊನೆ ಹಳೆಯ ಪ್ರಭಾವವನ್ನೇ ಬೀರಿದರೂ ಹೊಸ ಅನುಭವದ ಮನವರಿಕೆಯಾಗುತ್ತದೆ.

Printed at Decent Offset, Naraina Indl. Area Ph. I, New Delhi-110 028.